# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್.

MUNJAVU' Kannada Weekly, KOPPA - CHM. ಫೋನ್ : 114

೩ನೇ ವರ್ಷ 6ನೇ ಸಂಚಿಕೆ ಕೊಪ್ಪ 24-9-1989 ಭಾನುವಾರ ಬೆಲೆ 50 ಪೈಸೆ


## ಬಸ್ರಿಕಟ್ಟೆಯಲ್ಲಿ ಕಾಫಿ ಬೆಳೆಗಾರರ ಸಂಮಿ

ಬಸರಿಕಟ್ಟೆ: ಇಲ್ಲಿನ ಸಿಂಡಿಕೇಟ್ ಬ್ಯಾಂಕ್ ಆಶ್ರಮದಲ್ಲಿ. ಸೆ 13 ರಂದು ಸುತ್ತಮುತ್ತಲಿನ ಕಾಫಿ ಬೆಳೆಗಾರರ ಸಂಮಿಲನವನ್ನು ಏರ್ಪಡಿಸಲಾಗಿತ್ತು. ಕಾಫಿ ಬೆಳೆಗಾರರಿಗೆ ಬ್ಯಾಂಕಿನಿಂದ ಆಗಬೇಕಾದ ಅನುಕೂಲತೆಗಳು ಹಾಗೂ ಕಾಫಿ ತೋಟದ ಸಮಸ್ಯೆಗಳ ಪರಿಹಾರ ಕುರಿತ್ತ ವಿಮರ್ಶೆಯೇ ಸಂಮಿಲನದ ಕಾರಣವೆಂದು ಸ್ವಾಗತ ಭಾಷಣ ಮಾಡಿದ ಶಾಖಾಧಿಕಾರಿ ರಮೇಶ್‌ರಾವ್ ತಿಳಿಸಿದರು.

ಬಾಳೆಹೊನ್ನೂರಿನ ಕೇಂದ್ರೀಯ ಕಾಫಿ ಸಂಶೋಧನಾಲಯದ ತಜ್ಞರು ಬೆಳೆಗಾರರ ತೋಟದ ಸಮಸ್ಯೆಗಳಿಗೆ ಪರಿಹಾರ ಸೂಚಿಸಿದರು. ಸಂಶೋಧನಾಲಯದ ಜಂಟಿ ನಿರ್ದೇಶಕರಾದ ಗೋವಿಂದರಾಜ್ ಮುಖ್ಯ ಅತಿಥಿಯಾಗಿದ್ದರು. ಕಾಫಿ ಮಂಡಳಿ ಉಪ ನಿರ್ದೇಶಕರಾದ ಕಾಳೇಗೌಡ ಮತ್ತು ಕಾಫಿ ಮಂಡಳಿ ಸದಸ್ಯ ಬಿ. ಪಿ. ರಮೇಶ್ ಬೆಳೆಗಾರರ ಸಮಸ್ಯೆಗಳಿಗೆ ಸಮಾಧಾನವಿತ್ತರು.

ಸಿಂಡಿಕೇಟ್ ಬ್ಯಾಂಕಿನ ಶಿವಮೊಗ್ಗ ವಿಭಾಗಾಧಿಕಾರಿ ಬಿ. ಕೆ. ನಾಯಕ್ ಅವರು ಅಧ್ಯಕ್ಷರಾಗಿದ್ದು, ಬ್ಯಾಂಕಿನ ವತಿಯಿಂದ ಬೆಳೆಗಾರರ ಸಂಶಯ ನಿವಾರಿಸಿ ಬೆಳೆಗಾರರು ತಮ್ಮ ಆದಾಯದ ಒಂದು ಭಾಗವನ್ನು ಬ್ಯಾಂಕಿನಲ್ಲಿ ಠೇವಣಿ ಇಡಬೇಕೆಂದು ವಿನಂತಿಸಿದರು. ಶಾಖೆಯ ಗ್ರಾಮೀಣಾಭಿವೃದ್ಧಿ ಅಧಿಕಾರಿ ಎ. ಸಿ. ಶಂಕರ್ ಎಲ್ಲರನ್ನೂ ವಂದಿಸಿದರು.

ಸುತ್ತಮುತ್ತಲಿನ ಹೆಚ್ಚಿನ ಬೆಳೆಗಾರರು ಭಾಗವಹಿಸಿ ಕಾರ್ಯಕ್ರಮದ ಪ್ರಯೋಜನ ಪಡೆದರು.

# ಶೃಂಗೇರಿ ಹಿರಿಯ ಸ್ವಾಮೀಜಿ ಹಠಾತ್ ದೇಹಾಂತ

(ನಮ್ಮ ಪ್ರತಿನಿಧಿಯಿಂದ)

**ಶೃಂಗೇರಿ : ಇಲ್ಲಿನ ಶಂಕರಾಚಾರ್ಯರ ದಕ್ಷಿಣಾಮ್ನಾಯ ಪೀಠದ 35ನೇ ಜಗದ್ಗುರುಗಳಾಗಿದ್ದ ಅಭಿನವ ವಿದ್ಯಾತೀರ್ಥ ಮಹಾ ಸ್ವಾಮಿಗಳು ಸೆ. 21ರ ಗುರುವಾರ ಬೆಳಿಗ್ಗೆ 11 ಗಂಟೆಯಲ್ಲಿ ಹಠಾತ್ ಹೃದಯಾಘಾತದಿಂದ ನಿಧನರಾದರು.**

ಈ ನರಕ ಚತುರ್ದಶಿಯಂದು 73 ನೇ ವರ್ಷಕ್ಕೆ ಕಾಲಿರಿಸಬೇಕಾಗಿದ್ದ ವಿದ್ಯಾತೀರ್ಥರು ಹಲವು ಕಾಲದಿಂದ ಅಸ್ತಮಾ ಮತ್ತು ಹೃದಯ ರೋಗಗಳಿಂದ ನರಳುತ್ತಿದ್ದು, ತಮ್ಮ ಉತ್ತರಾಧಿಕಾರಿಯನ್ನು ಸಹ ನಿಯುಕ್ತಿ ಮಾಡಿಕೊಂಡಿದ್ದರು.

### ಹೃದಯಾಘಾತ

ಗುರುವಾರ ನರಸಿಂಹ ವನದ ತಮ್ಮ ನಿವಾಸದಲ್ಲಿ ಬೆಳಿಗ್ಗೆ 10-55 ರ ವರೆಗೂ ಸಾರ್ವಜನಿಕರಿಗೆ ದರ್ಶನ ನೀಡಿದರು ಅಷ್ಟರಲ್ಲಿ ಅವರಿಗೆ ಹಠಾತ್ ಎದೆ ನೋವು ಕಾಣಿಸಿಕೊಂಡು, ಧನ್ವಂತರಿ ಆಸ್ಪತ್ರೆಯ ವೈದ್ಯೆ ಡಾ॥ ಶುಭಾ ಅವರನ್ನು ತಕ್ಷಣ ಕರೆಸಲಾಯಿತು. ಅವರು ಪರೀಕ್ಷಿಸಿ, ಚಿಕಿತ್ಸೆ ನೀಡಿ ವಿಶ್ರಾಂತಿ ತೆಗೆದು ಕೊಳ್ಳಲು ಹೇಳಿ ಹೊರಡುವಷ್ಟರಲ್ಲೇ ಕುಸಿದು ಬಿದ್ದ ಸ್ವಾಮಿಗಳು ಕ್ಷಣ ಮಾತ್ರದಲ್ಲಿ ಇಹಲೋಕ ತ್ಯಜಿಸಿದರು.

ಅವರ ನಿಧನದ ಸುದ್ದಿ ಹಬ್ಬುತ್ತಿದ್ದಂತೆ ಶೃಂಗೇರಿ ಪೇಟೆಯ ಅಂಗಡಿ ಮುಂಗಟ್ಟುಗಳು ಬಂದ್ ಆದವು. ಸ್ಥಳೀಯರೂ ಸುತ್ತಮುತ್ತಲ ಊರುಗಳವರೂ ಸಹಸ್ರಾರು ಸಂಖ್ಯೆಯಲ್ಲಿ ಬಂದು ಮೃತರ ಅಂತಿಮ ದರ್ಶನ ಪಡೆದರು. ದೂರ ದೂರದ ಸ್ಥಳಗಳಿಂದಲೂ ಭಕ್ತಾದಿಗಳು ಬಂದು ನೆರೆದರು. ಮಹಾರಾಷ್ಟ್ರದ ಸತಾರಾದಲ್ಲಿ ಚಾತುರ್ಮಾಸದಲ್ಲಿದ್ದ ಕಿರಿಯ ಸ್ವಾಮಿಗಳು ಕೂಡಲೇ ವಿಶೇಷ ವಾಯುದೂತ್ ವಿಮಾನದಲ್ಲಿ ಮಂಗಳೂರಿಗೆ ಬಂದು ರಾತ್ರಿ ಶೃಂಗೇರಿಗೆ ತಲುಪಿದರು.

### ಪ್ರಧಾನಿಯಿಂದ ನಮನ

ಶುಕ್ರವಾರ ಬೆಳಿಗ್ಗೆ ಪಾರ್ಥಿವ ಶರೀರವನ್ನು ಸಕಲ ಶೃಂಗಾರದೊಂದಿಗೆ ಬೆಳ್ಳಿ ಪಲ್ಲಕ್ಕಿಯಲ್ಲಿ ಕೂರಿಸಿ, ಪೇಟೆಯಲ್ಲಿ ಮೆರವಣಿಗೆ ನಡೆಯಿತು 12-35ಕ್ಕೆ ಹೆಲಿಕಾಪ್ಟರ್‌ನಲ್ಲಿ ಬಂದಿಳಿದ ಪ್ರಧಾನಿ ರಾಜೀವ್ ಗಾಂಧಿ, ಹೆಲಿಪ್ಯಾಡಿನಿಂದ ಕಾಲ್ನಡಿಗೆಯಲ್ಲೇ ಮಠಕ್ಕೆ ಬಂದು, ಸ್ವಾಮಿಗಳ ಶರೀರಕ್ಕೆ ಹೂಹಾರ ಅರ್ಪಿಸಿ ಅಂತಿಮ ಗೌರವ ಸಲ್ಲಿಸಿದರು.

ಅನಂತರ ನರಸಿಂಹವನದಲ್ಲಿ ನರಸಿಂಹ ಭಾರತಿಗಳ ಸಮಾಧಿಯ ಬಲ ಭಾಗದಲ್ಲಿ ಸಂಪ್ರದಾಯಕ್ಕನುಗುಣವಾಗಿ ವೇದ ಘೋಷದೊಂದಿಗೆ ಪಾರ್ಥಿವ ಶರೀರವನ್ನು ಸಮಾಧಿ ಮಾಡಲಾಯಿತು.

### ಅಖಿಲ ಭಾರತ ಕೀರ್ತಿ

ಕೈವು ರಾಮಾಶಾಸ್ತ್ರಿಗಳೆಂಬವರ ಎರಡನೇ ಮಗನಾಗಿ ಪೂರ್ವಾಶ್ರಮದಲ್ಲಿ ಶ್ರೀನಿವಾಸ ಎಂಬ ಹೆಸರಿದ್ದು, ಬೆಂಗಳೂರಿನ ಮಾಧ್ಯಮಿಕ ಶಾಲೆಯೊಂದರಲ್ಲಿ ಓದುತ್ತಿದ್ದ ಇವರನ್ನು ಚಂದ್ರಶೇಖರ ಭಾರತಿಗಳು ಶೃಂಗೇರಿಗೆ ಕರೆತಂದು ಉಪನಯನ ಮಾಡಿಸಿ, ಅವರ 14ನೇ ವಯಸ್ಸಿನಲ್ಲಿ 22-5-1931ರಂದು ಸನ್ಯಾಸ ದೀಕ್ಷೆ ನೀಡಿದ್ದರು. 1954ರ ಅಕ್ಟೋಬರ್ 16ರಂದು ಶೃಂಗೇರಿ ಪೀಠದ 35ನೇ ಗುರುಗಳಾಗಿ ಪೀಠಕ್ಕೆ ಬಂದ ಇವರು, ಭಾರತದಾದ್ಯಂತ ಹಲವು ಬಾರಿ ಸಂಚರಿಸಿದ್ದಲ್ಲದೆ ನೇಪಾಳದಲ್ಲೂ ಪ್ರವಾಸ ಮಾಡಿದ್ದರು. ಸಂಸ್ಕೃತದ ಮಹಾ ವಿದ್ವಾಂಸರಾಗಿದ್ದುದಲ್ಲದೆ, ಕನ್ನಡ, ಹಿಂದಿ, ತಮಿಳು, ತೆಲುಗು ಮುಂತಾದ ಭಾಷೆಗಳಲ್ಲೂ ಪಾಂಡಿತ್ಯ ಗಳಿಸಿದ್ದರು.

## ಸೆ. 28ರಂದು ಕೊಪ್ಪದಲ್ಲಿ ವಸಂತ ಸಾಹಿತ್ಯೋತ್ಸವ

ಕ.ಪ. ಗಣಪತಿ ಪ್ರಭುಗಳ ಗೌರವ ಅಧ್ಯಕ್ಷತೆಯಲ್ಲಿ ಸಾಹಿತ್ಯ ಪರಿಷತ್ತಿನ ಕೊಪ್ಪ ತಾ॥ ಸಮಿತಿಯನ್ನು ರಚಿಸಲಾಗಿದೆ

ಸೆಪ್ಟೆಂಬರ್ 28ರ ಗುರುವಾರ ಮಧ್ಯಾಹ್ನ 3 ಗಂಟೆಗೆ ಕೊಪ್ಪ ಪುರಭವನದಲ್ಲಿ, ತಾ॥ ಘಟಕದ ಉದ್ಘಾಟನೆ ಮತ್ತು ವಸಂತ ಸಾಹಿತ್ಯೋತ್ಸವ ಏರ್ಪಡಿಸಲು ಕಾರ್ಯಕಾರಿ ಸಮಿತಿಯ ಸೆ. 18ರ ಸಭೆಯಲ್ಲಿ ನಿರ್ಧರಿಸಲಾಗಿದೆ.

## ಬಡವರಿಗೆ ತೀವ್ರವಾಗಿ ಥಳಿಸಿದ ಅರಣ್ಯಾಧಿಕಾರಿ ವಿರುದ್ಧ ಪ್ರತಿಭಟನೆ

(ವರದಿ : ಕಲ್ಕುಳಿ ವಿಠಲ ಹೆಗ್ಡೆ)

ಶೃಂಗೇರಿ : ಇಲ್ಲಿನ ವಲಯ ಅರಣ್ಯಾಧಿಕಾರಿ ಮುನಿಸ್ವಾಮಿ ಅವರು ಬೇಗಾರು ಸಮೀಪದ ಮಲ್ಲಪ್ಪ ನಾಯ್ಕ ಎಂಬವರಿಗೆ, ಕೃಷ್ಣ ನಾಯ್ಕ ಎಂಬವರಿಂದ (ಖರೀದಿಗೆ) ಅಕ್ರಮವಾಗಿ ನಾಟ ಕೊಯ್ಯಿಸಿದರೆಂಬ ಕಾರಣಕ್ಕೆ ಕಾಡಿಗೊಯ್ದು, ಬಟ್ಟೆ ಬಿಚ್ಚಿ ಕೈಕಾಲು ಕಟ್ಟಿ ವಿಪರೀತ ಥಳಿಸಿದ ಬಗ್ಗೆ ತೀವ್ರ ಪ್ರತಿಭಟನೆ ನಡೆಯಿತು.

ಅರಣ್ಯಾಧಿಕಾರಿಯಿಂದ ಜಾಮೀನಿನ ಮೇಲೆ ಬಿಡುಗಡೆಯಾಗಿದ್ದ ಮಲ್ಲಪ್ಪನಾಯ್ಕ ಆಸ್ಪತ್ರೆಗೆ ದಾಖಲಾಗಿ, ನಂತರ ದುರ್ಬಲರ ಹಿತ ರಕ್ಷಣಾ ಮತ್ತು ಸೇವಾ ಪಡೆಯ ನೆರವಿನಿಂದ ಪೋಲೀಸು ಕೇಸು ದಾಖಲಿಸಿದರು. ಬುಧವಾರ ಪಡೆಯ ನೇತೃತ್ವದಲ್ಲಿ 400ಕ್ಕೂ ಹೆಚ್ಚು ಜನರು ಬೃಹತ್ ಪ್ರತಿಭಟನೆ ನಡೆಸಿದರು. ಕೊನೆಗೆ ಎ.ಸಿ.ಎಫ್. ಸಮ್ಮುಖದಲ್ಲಿ ಮಾತುಕತೆ ನಡೆದು. ಮುನಿಸ್ವಾಮಿ ಸಾರ್ವಜನಿಕರ ಕ್ಷಮೆ ಕೋರಿದ್ದರ ಮೇರೆಗೆ ಎರಡೂ ಕಡೆಯವರ ಕೇಸುಗಳನ್ನು ಹಿಂತೆಗೆದುಕೊಳ್ಳಲು ಒಪ್ಪಲಾಯಿತು.

### ತಪ್ಪು ನಿರ್ಣಯ

ಆದರೆ ಮುನಿಸ್ವಾಮಿ ಹೀಗೆ ಬಡ ಜನರಿಗೆ ತೀವ್ರವಾಗಿ ಥಳಿಸುವುದು ಪದೇ ಪದೇ ನಡೆಯುತ್ತಿರುವುದರಿಂದ ಅವರ ವಿರುದ್ಧವೂ, ಇತ್ತ ಕಳ್ಳ ನಾಟ ಕಡಿಯುವವರ ವಿರುದ್ಧವೂ ಸರಿಯಾದ ತನಿಖೆ ಮತ್ತು ಕಾನೂನು ಬದ್ಧ ಕ್ರಮ ಜರುಗಲೇಬೇಕಿತ್ತು. ಈ ಎರಡೂ ರೀತಿಯ ತಪ್ಪಿತಸ್ಥರಿಗೂ ಪರಸ್ಪರ ವಿನಾಯಿತಿ ಸಿಕ್ಕಿರುವುದು ಕಾಡಿನ ಉಳಿವಿಗೂ ಒಳ್ಳೆಯದಲ್ಲ, ಬಡವರ ಹಿತಕ್ಕೂ ಒಳ್ಳೆಯದಲ್ಲ ಎಂದು ನಿರ್ದಾಕ್ಷಿಣ್ಯವಾಗಿ ಹೇಳಲೇಬೇಕಾಗಿದೆ.

## ಜಿ. ಪ. ಸದಸ್ಯೆ ಬೇಲಿ ಹಾಕಿಸಿದ್ದ ಬೇನಾಮಿ ಉಚಿತ ನಿವೇಶನ ಸರ್ಕಾರದ ವಶಕ್ಕೆ — ಎ. ಸಿ. ಆದೇಶ

ಕೊಪ್ಪ : ಎರಡು ಬೇನಾಮಿ ಉಚಿತ ನಿವೇಶನಗಳಿಗೆ ಜಿ.ಪ. ಸದಸ್ಯೆ ಶ್ರೀಮತಿ ಮ್ಮ ಬೇಲಿ ಹಾಕಿಸಿ ಕೊಂಡಿದ್ದಾರೆನ್ನಲಾಗಿರುವ ಹಗರಣ ಕಳೆದ ವಾರ ದಿಢೀರಾಗಿ ಹೊಸ ತಿರುವು ಪಡೆದುಕೊಂಡಿತು. ಕೊಪ್ಪದ ಸುತ್ತ ಅಕ್ರಮ ಗುಡಿಸಲು, ಬೇಲಿ ಮಾಡಿಕೊಂಡಿರುವ ಎಲ್ಲ ಪ್ರಕರಣಗಳ ಬಗೆಗೂ ಆಮೂಲಾಗ್ರ ಚರ್ಚೆಗೆ ಕಾರಣವಾಯಿತು. ಇದಕ್ಕಾಗಿ ಶಾಂತಿ ಸಮಿತಿಯ ಒಂದು ವಿಶೇಷ ಸಭೆಯೇ ನಡೆಯಿತು.

ಮಾಲತಿ ಮತ್ತು ಮುತ್ತ ಎಂಬ ಬೇನಾಮಿ ಹೆಸರುಗಳಲ್ಲಿ ಎಳೆಂಟು ವರ್ಷಗಳ ಹಿಂದೆ ಮಂಜೂರಾಗಿರುವ, ಭಾರತ್ ರೈಸ್ ಮಿಲ್ ಎದುರಿನ ಸುಮಾರು 1 ಲಕ್ಷ ರೂ. ಬೆಲೆ ಬಾಳುವ ಈ 2 ನಿವೇಶನಗಳ ಬೇಲಿ ತೆಗೆಸಿ, ಅಲ್ಲಿ ಅಂಗನವಾಡಿ ಕಟ್ಟಡ ಕಟ್ಟಿಸಬೇಕೆಂದು ಸ್ಥಳೀಯ ಜನತೆ ಒಂದು ವರ್ಷದಿಂದ ಚಳುವಳಿ ನಡೆಸುತ್ತಿರುವುದನ್ನೂ, ಈ ಬಗ್ಗೆ ತಹಸೀಲ್ದಾರ್ ಮತ್ತು ಎ. ಸಿ. ಯವರಿಂದ ಆದೇಶವಾಗಿದ್ದು, ಬೇಲಿಯನ್ನು ಸೆ. 19ರೊಳಗೆ ತೆಗೆಸದಿದ್ದಲ್ಲಿ 20ರಿಂದ ತಾ॥ ಕಛೇರಿ ಮುಂದೆ ಉಪವಾಸ ಸತ್ಯಾಗ್ರಹ ನಡೆಸುವುದಾಗಿ ತಾ॥ ನಾಗರಿಕ ಹಿತ ರಕ್ಷಣಾ ಸಮಿತಿ ಪ್ರಧಾನ ಕಾರ್ಯದರ್ಶಿ ಎ. ಜಿ. ಗೋಪಾಲ ಗೌಡ ನೋಟೀಸು ನೀಡಿದ್ದನ್ನೂ ಇಲ್ಲಿ ಸ್ಮರಿಸಬಹುದು.

ಈ ಆಜ್ಞೆ ಜಾರಿಗೊಳಿಸಿ ಬೇಲಿ ತೆಗೆಸಬೇಕೆಂದು ಪಟ್ಟು ಹಿಡಿದು ನಾಗರಿಕ ಸಮಿತಿಯವರು ಸೆ. 19 ರೊಳಗೆ ಬೇಲಿ ತೆಗೆಸದಿದ್ದಲ್ಲಿ 20 ರಿಂದ ತಾ ॥ ಕಛೇರಿ ಎದುರು ಉಪವಾಸ ಹೂಡುವುದಾಗಿ ಬೆದರಿಕೆ ಹಾಕಿದ್ದರು. (ನಾಲ್ಕನೇ ಪುಟಕ್ಕೆ)

# ಶೃಂಗೇರಿ ವಸಂತ ಸಾಹಿತ್ಯೋತ್ಸವ : ಪುಟ್ಟ ಸುಂದರ ಕಾರ್ಯಕ್ರಮ

ವಸಂತ ಸಾಹಿತ್ಯೋತ್ಸವದ ಅಂಗವಾಗಿ ಶೃಂಗೇರಿ ತಾ|| ಕನ್ನಡ ಸಾಹಿತ್ಯ ಪರಿಷತ್ತು ಸೆ. 10 ರಂದು ಏರ್ಪಡಿಸಿದ್ದ ಕುವೆಂಪು ಸಾಹಿತ್ಯ ವಿಚಾರ ಸಂಕಿರಣ ಒಂದು ಪುಟ್ಟ ಸುಂದರ ಕಾರ್ಯಕ್ರಮವಾಗಿ ಮೂಡಿ ಬಂದಿತು.

'ಕುವೆಂಪು ಜೀವನಾದರ್ಶ' ಕುರಿತು ಮಾತನಾಡಿದ ಬಾಳೆಹೊನ್ನೂರು ಕಾಲೇಜು ಉಪನ್ಯಾಸಕ ಎಚ್. ಎಸ್. ಶಿವಸ್ವಾಮಿ, ಕುವೆಂಪುರವರ ಪೂರ್ವಿಕರು ಜೈನರಾಗಿದ್ದುದನ್ನು ಉಲ್ಲೇಖಿಸಿ, ಶೇಕ್ಸ್‌ಪಿಯರ್, ಟಾಗೂರ್‌ರಂತೆ ಕುವೆಂಪು ಅವರ ಕಾವ್ಯ, ಕಾದಂಬರಿಗಳಲ್ಲಿ ಜೀವಂತ ಕಲೆ ಇದೆ ಎಂದರು.

ಕುವೆಂಪು ಮೌಢ್ಯ, ಸಂಪ್ರದಾಯ, ಜಾತಿಗಳನ್ನು ವಿರೋಧಿಸುತ್ತ ವೈಜ್ಞಾನಿಕ, ವೈಚಾರಿಕ ದೃಷ್ಟಿ ಇಟ್ಟುಕೊಂಡ ಕ್ರಾಂತಿಕಾರಿ. ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಕ್ರಾಂತಿಗೀತೆಗಳನ್ನು ಬರೆದು ಹಾಡಿ ಪೋಲೀಸ್ ಕಡತಗಳಲ್ಲಿ ದಾಖಲಾಗಿದ್ದವರು. ಮುಂದಿನ ಪೀಳಿಗೆಯ ಉನ್ನತಿಗಾಗಿ ಎಲ್ಲರೂ ಮನುಷ್ಯರಾಗಿ ಬದುಕಲು 'ವಿಶ್ವಮಾನವ ಸಂದೇಶ'ವನ್ನು ಸಾರಿದವರು ಎಂದು ಅವರು ಹೇಳಿದರು.

ಮಲೆನಾಡಿನ ನಿಸರ್ಗಕ್ಕೆ ಕುವೆಂಪು ಕಾವ್ಯ ಸ್ಪಂದಿಸಿದ ಬಗೆಯನ್ನು ವರ್ಣಿಸಿದ ಸ್ಥಳೀಯ ಕಾಲೇಜು ಉಪನ್ಯಾಸಕ ಹಯವದನ ಉಪಾಧ್ಯ, ಇಲ್ಲಿನ ವಿಧ ವಿಧ ಬಣ್ಣದ ಹಕ್ಕಿ, ಹೊಳೆ, ಕಾಡು, ಗುಡ್ಡಗಳನ್ನು ತಮ್ಮ ಕಾವ್ಯಗಳಲ್ಲಿ ಚಿತ್ರಿಸಿರುವುದನ್ನು ವಿವರಿಸಿದರು. ಭಾರತೀಯ ವೇದಾಂತ, ಕಾವ್ಯ ಮೀಮಾಂಸೆಗಳಿಂದ ಪ್ರಭಾವಿತರಾಗಿದ್ದ ಕುವೆಂಪು, ವೈದಿಕರ ಹೋಮಗಳಲ್ಲಿ ಸರ್ವವನ್ನೂ ಅಗ್ನಿಗೆ ಹಾಕಿ, ನಾಶದಿಂದ ಅಭಿವೃದ್ಧಿ ಬಯಸಿದರೆ, ಪ್ರಕೃತಿಯ ಹೋಮದಲ್ಲಿ ಸೂರ್ಯನೇ ಅಗ್ನಿಯಾಗಿ, ತನ್ನನ್ನೇ ದಹಿಸಿಕೊಂಡು ಸಕಲವನ್ನೂ ಸೃಷ್ಟಿಸುವ ವೈಜ್ಞಾನಿಕ ದೃಷ್ಟಿಕೋನವನ್ನು ಪ್ರತಿಪಾದಿಸಿದ್ದನ್ನು ಉಪಾಧ್ಯ ಎತ್ತಿ ಹೇಳಿದರು.

ಕುವೆಂಪುರವರ 'ಶ್ರೀ ರಾಮಾಯಣ ದರ್ಶನಂ'ದಲ್ಲಿ ಸ್ತ್ರೀ ಪಾತ್ರದ ವಿಕಾಸ ಕುರಿತು ಮಾತನಾಡಿದ ಸ್ಥಳೀಯ ಕಾಲೇಜು ಉಪನ್ಯಾಸಕಿ ತಾರಾ ಅವರು, ವಾಲ್ಮೀಕಿ ರಾಮಾಯಣದಲ್ಲಿ ಅತ್ಯಂತ ಕೀಳು ಭಾವನೆ ಮೂಡಿಸುವ ಮಂಥರೆ ಮತ್ತು ಶೂರ್ಪನಖಿಯರ ಪಾತ್ರಗಳನ್ನು ಕುವೆಂಪು ಚಿತ್ರಿಸಿದ ರೀತಿಯನ್ನು ಉದಹರಿಸಿದರು. ಮಂಥರೆಯ ಒಳ್ಳೆಯ ಭಾವನೆ; ಶೂರ್ಪನಖಿ 'ಚಂದ್ರಮುಖಿ'ಯಾಗಿದ್ದವಳು 'ಆರ್ಯಪುತ್ರ'ನ ಅವಮಾನದಿಂದ, ಶೂರ್ಪನಖಿಯಾದಳೆಂದು ಚಿತ್ರಿಸಿ ಕುವೆಂಪುರವರು ಸ್ತ್ರೀ ಕುಲದ ಗೌರವವನ್ನು ಎತ್ತಿ ಹಿಡಿದ ಬಗ್ಗೆ ಒಂದು ಸುಂದರ ಪ್ರಬಂಧವನ್ನು ಮಂಡಿಸಿದರು.

ಕುವೆಂಪು ಕಾದಂಬರಿಗಳ ಕೇಂದ್ರ ಆಶಯಗಳ ವಿಚಾರವಾಗಿ ಮಾತನಾಡಿದ ಉಪನ್ಯಾಸಕ ಕೆ. ಪುಟ್ಟಯ್ಯ, ಸಮಾಜದ ವಿಕಾಸಕ್ಕೆ ಉತ್ಕ್ರಾಂತಿಯಾದ ಅವರ ವಿಚಾರಗಳನ್ನು ವಿವರಿಸಿ, ಅವರ ಕಾದಂಬರಿಗಳಲ್ಲಿ ವರ್ಗ-ವರ್ಣ ಸಂಘರ್ಷಗಳನ್ನೂ, ಸಮಾನತೆಯ ಆಶಯಗಳನ್ನೂ ಉದಾಹರಣ ಸಹಿತ ವಿವರಿಸಿದರು.

ವಿವೇಕಾನಂದರು ಚಿಕಾಗೋದಲ್ಲಿ ಹಿಂದೂ ಧರ್ಮದ ಹಿರಿಮೆಯನ್ನು ಮೆರೆಸುತ್ತಿದ್ದರೆ, ಇತ್ತ ಶೃಂಗೇರಿ ಜಗದ್ಗುರುಗಳು ಶೂದ್ರರಿಂದ ಅಡ್ಡ ಪಲ್ಲಕ್ಕಿ ಹೊರಿಸಿಕೊಂಡು ತಮ್ಮ ಅಹಂಕಾರ ಮೆರೆಯುತ್ತಿದ್ದರು; ಅದೇ ಸಮಯಕ್ಕೆ ಮುಂಡಗದ್ದೆಯಲ್ಲಿ ಶೂದ್ರರು ಕ್ರೈಸ್ತರಾಗಿ ಮತಾಂತರ ಹೊಂದುತ್ತಿದ್ದರು ಎಂಬುದಾಗಿ ಪುರೋಹಿತಶಾಹಿಯಿಂದ ಹಿಂದೂ ಧರ್ಮ ಅವನತಿ ಹೊಂದಿದ ಬಗ್ಗೆ ಕುವೆಂಪು ಹೇಳಿರುವುದನ್ನು ಪ್ರಸ್ತಾಪಿಸಿ, ಮತಾಂತರದಿಂದ ಜಾತಿ ಪದ್ಧತಿ ನಾಶವಾಗಲಾರದು; ಪುರೋಹಿತ ಹೇಳಿದ್ದನ್ನೇ ಸತ್ಯವೆಂದು ತಿಳಿದಷ್ಟು ದಿನ ನೀವು ಉದ್ಧಾರವಾಗುವುದಿಲ್ಲ, ಅದಕ್ಕೆ ಮತಾಂತರ ಪರಿಹಾರವಲ್ಲ ಎಂಬ ನೇರ ಉದಾಹರಣೆಯನ್ನು ಕೊಟ್ಟರು (ಕಾನೂರು ಹೆಗ್ಗಡಿತಿ).

ವಿಚಾರ ಸಂಕಿರಣದ ಅಧ್ಯಕ್ಷತೆ ವಹಿಸಿದ್ದ ಡಾ|| ಶ್ರೀಕಂಠ ಕೂಡಿಗೆ, ಕುವೆಂಪು ಕನ್ನಡದ ಕವಿಯಾದ ಏಕಮಾತ್ರ ಕಾರಣಕ್ಕೆ ನೊಬೆಲ್ ಪ್ರಶಸ್ತಿಯಿಂದ ವಂಚಿತರಾಗಿ

(3ನೇ ಪುಟಕ್ಕೆ)

### ಪದ್ಯ ದಂಗಳ

**ಹೂ ಮೊಗ**

ಕೆಂಗುಲಾಬಿಯಂದದಲಿರುವ
ನಿನ್ನ ಮೊಗವ ನಾನೆಂತು ಬಣ್ಣಿಸಲಿ ಗೆಳತಿ!
ಎಂದ ನಲ್ಲನಿಗೆ
ಎನ್ನ ಮೊಗವ ಹೂವಿಗೆ ಹೋಲಿಸದಿರು
ನಲ್ಲ, ಹೂವಂತೆ ನೂರಾರು ದುಂಬಿಗಳಿಗೆ
ಮುಖವೊಡ್ಡಲಾರೆ—ಎಂದು
ನಲ್ಲೆ ನುಡಿದಾಗ
ನಲ್ಲನೆದೆಯಲ್ಲಿ ಚೂರಿ ತಿವಿದಂತೆನಿಸಿತು.

—ಅಂಜಲಿ ಗುರ್ಜರ್, ಕೊಪ್ಪ.

ದಲಿತರ, ಹಿಂದುಳಿದ ಜಾತಿಗಳ ಮತ್ತು ಅಲ್ಪ ಸಂಖ್ಯಾತರ ಏಕತೆ :

# ಅ. 15, 16ರಂದು ಕೊಪ್ಪ, ಶೃಂಗೇರಿಗಳಲ್ಲಿ ವಿಚಾರ ಸಂಕಿರಣ

ದಲಿತರ, ಹಿಂದುಳಿದ ಜಾತಿಗಳ ಮತ್ತು ಅಲ್ಪಸಂಖ್ಯಾತರ ಏಕತೆಗಾಗಿ ರಾಜ್ಯ ಮತ್ತು ಜಿಲ್ಲಾ ಮಟ್ಟಗಳಲ್ಲಿ ನಡೆಯುತ್ತಿರುವ ಚಟುವಟಿಕೆಗೆ ಪೂರಕವಾಗಿ ಶೃಂಗೇರಿ ಮತ್ತು ಕೊಪ್ಪದಲ್ಲೂ ವಿಚಾರ ಸಂಕಿರಣಗಳನ್ನು ಏರ್ಪಡಿಸಲು ನಿರ್ಧರಿಸಲಾಗಿದೆ.

ಇಂಥದೇ ಜಿಲ್ಲಾ ಮಟ್ಟದ ವಿಚಾರ ಸಂಕಿರಣ ಚಿಕ್ಕಮಗಳೂರಲ್ಲಿ ಸೆ. 10ರಂದು ನಡೆಯಿತು. ವಕೀಲ ಡಿ. ಧ್ರುವನಾರಾಯಣ ಅವರ ಅಧ್ಯಕ್ಷತೆಯಲ್ಲಿ ಎಂ. ಬಿ. ರತ್ನಾಕರ್ ಉದ್ಘಾಟಿಸಿದರು. ದಲಿತ ಸಂಘರ್ಷ ಸಮಿತಿಯ ಎಂ. ಡಿ. ಗಂಗಯ್ಯ ಆಶಯ ಭಾಷಣ ಮಾಡಿದರು.

ಹಿಂದುಳಿದ ವರ್ಗಗಳ ಏಕತೆಯ ಅನಿವಾರ್ಯತೆ ಕುರಿತು ದ. ಸಂ. ಸ. ನಾಯಕ ಪ್ರೊ| ಬಿ. ಕೃಷ್ಣಪ್ಪ, ಅಲ್ಪ ಸಂಖ್ಯಾತರ ಸಮಸ್ಯೆ, ಸ್ಥಿತಿ-ಗತಿಗಳನ್ನು ಕುರಿತು ಲೇಖಕಿ ಬಾನು ಮುಷ್ತಾಕ್ ಹಾಗೂ ಹಿಂದುಳಿದ ವರ್ಗಗಳ ಮಹಿಳೆಯರ ಸ್ಥಿತಿಗತಿ ಕುರಿತು ನ. ರಾ. ಪುರದ ವಕೀಲರಾದ ಶಶಿಕಲಾ ಉರಣ್‌ಕರ್ ವಿಚಾರಗಳನ್ನು ಮಂಡಿಸಿದರು.

ದ. ಸಂ. ಸ. ರಾಜ್ಯ ಸಂಚಾಲಕ ಚಂದ್ರಪ್ರಸಾದ್ ತ್ಯಾಗಿಯವರ ಅಧ್ಯಕ್ಷತೆಯಲ್ಲಿ ನಡೆದ 2 ನೇ ಗೋಷ್ಠಿಯಲ್ಲಿ ಏಕತೆಯ ಸ್ವರೂಪ ಮತ್ತು ಸಮಸ್ಯೆಗಳನ್ನು ಕುರಿತು ಉಪನ್ಯಾಸಕ ಎಚ್.ಎಂ. ರುದ್ರಸ್ವಾಮಿ, ಸೈಯದ್ ಮುನೀರ್ ಅಹಮದ್, ಎಚ್. ಹೇಮಾವತಿ, ಎಂ. ಎ. ಶರೀಫ್, ರೈತ ಸಂಘದ ಎಚ್. ಎಚ್. ದೇವರಾಜ್, ಮುಂತಾದವರು ಮಾತನಾಡಿದರು.

ಸಂಜೆ ದ.ಸಂ. ಸ. ಜಿಲ್ಲಾ ಸಂಚಾಲಕ ಆರ್. ಕಲ್ಲಯ್ಯನವರ ಅಧ್ಯಕ್ಷತೆಯಲ್ಲಿ ವಿವಿಧ ಸಂಘ-ಸಂಸ್ಥೆಗಳ ಪ್ರತಿನಿಧಿಗಳೊಡನೆ ಚರ್ಚೆ ನಡೆದು, ಜಿಲ್ಲಾ ಮಟ್ಟದಲ್ಲೂ ಒಂದು ಅಡ್‌ಹಾಕ್ ಸಮಿತಿ ರಚಿಸಲಾಯಿತು. ಸವಿತಾ ಸಮಾಜ, ಕುರುಹಿನ ಶೆಟ್ಟರ ಸಂಘ, ಮಡಿವಾಳ, ದೇವಾಂಗ, ಭಾವಸಾರ ಕ್ಷತ್ರಿಯ, ಗಾಣಿಗರು, ಕುರುಬರು, ಆರ್ಯ ಈಡಿಗ, ಉಪ್ಪಾರ ಮತ್ತಿತರ ಹಿಂದುಳಿದ ಜಾತಿಗಳ ಸಂಘ-ಸಂಸ್ಥೆಗಳು ಹಾಗೂ ಮುಸ್ಲಿಂ ಮತ್ತು ಕ್ರೈಸ್ತ ಸಂಘಟನೆಗಳ ಪ್ರತಿನಿಧಿಗಳು ಭಾಗವಹಿಸಿದ್ದರು.

ಜಿಲ್ಲೆಯ ಎಲ್ಲಾ ತಾ|| ಗಳಲ್ಲೂ ಇಂಥ ವಿಚಾರ ಸಂಕಿರಣಗಳನ್ನು ನಡೆಸಲು ನಿರ್ಧರಿಸಲಾಯಿತು. ಕೊಪ್ಪ ಮತ್ತು ಶೃಂಗೇರಿ ತಾ||ಗಳ ಪ್ರತಿನಿಧಿಗಳು ಸೆ. 17 ರಂದು ಕೊಪ್ಪದಲ್ಲಿ ಸಭೆ ಸೇರಿ, ಅಕ್ಟೋಬರ್ 15ರ ಭಾನುವಾರ ಕೊಪ್ಪದಲ್ಲೂ, 16 ರ ಸೋಮವಾರ ಶೃಂಗೇರಿಯಲ್ಲೂ ಇಂಥ ವಿಚಾರ ಸಂಕಿರಣ ಏರ್ಪಡಿಸಲು ನಿರ್ಧರಿಸಿ, ಇದಕ್ಕಾಗಿ ಸಿದ್ಧತಾ ಸಮಿತಿಗಳನ್ನು ರಚಿಸಲಾಯಿತು.

# ಕಾಫಿ ಉತ್ಪಾದನೆ ವೆಚ್ಚ ತಗ್ಗಬೇಕು

ಜಯಪುರ : ಅತಿ ಕಡಿಮೆ ಖರ್ಚಿನಲ್ಲಿ ಕಾಫಿ ಉತ್ಪಾದನೆಯಾಗುವಂತಾಗಬೇಕು, ಗೊಬ್ಬರದ ಮಿತ ಬಳಕೆಯಿಂದ ಉತ್ತಮ ಫಸಲನ್ನು ಪಡೆಯಬೇಕೆಂದು ಬೆಂಗಳೂರಿನ ಕಾಫಿ ಮಂಡಳಿಯ ಸಂಶೋಧನಾ ನಿರ್ದೇಶಕ ಡಾ|| ಪಿ. ಕೆ. ರಾಮಯ್ಯ ತಿಳಿಸಿದರು.

ಜಯಪುರ ಸಹ್ಯಾದ್ರಿ ಬೆಳೆಗಾರರ ಸಂಘ ಮತ್ತು ಪೈರೈಟ್ಸ್, ಫಾಸ್ಫೇಟ್ಸ್ ಅಂಡ್ ಕೆಮಿಕಲ್ಸ್ ಲಿಮಿಟೆಡ್‌ನವರು ಇತ್ತೀಚೆಗೆ ಜಯಪುರದಲ್ಲಿ ಏರ್ಪಡಿಸಿದ್ದ ಕಾಫಿ ಬೆಳೆಗಾರರ ವಿಚಾರ ಸಂಕಿರಣದ ಉದ್ಘಾಟನಾ ಭಾಷಣದಲ್ಲಿ ಅವರು ಈ ವಿಷಯ ವ್ಯಕ್ತಪಡಿಸಿದರು.

ಮಣ್ಣು ಪರೀಕ್ಷೆ ಮತ್ತು ಗೊಬ್ಬರದ ಬಳಕೆ ಬಗ್ಗೆ ಕಾಫಿ ಸಂಶೋಧನಾ ಕೇಂದ್ರದ ತಜ್ಞರಾದ ಜಯರಾಮ್ ಮತ್ತಿತರರು ಬೆಳೆಗಾರರಿಗೆ ಸಲಹೆಗಳನ್ನು ನೀಡಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಸಹ್ಯಾದ್ರಿ ಬೆಳೆಗಾರರ ಸಂಘದ ಅಧ್ಯಕ್ಷರಾದ ಪಿ. ಜಿ. ಗುರ್ಜರ್ ಕಾಫಿ ಬೆಳೆಗಾರರ ಸಮಸ್ಯೆಗಳು ಮತ್ತು ಕಾಫಿ ಮಾರುಕಟ್ಟೆ ಸಮಸ್ಯೆಗಳ ಬಗ್ಗೆ ಮಾತನಾಡಿದರು.

ಪಿ.ಪಿ.ಸಿ.ಎಲ್.ನ ಮಾರಾಟ ವ್ಯವಸ್ಥಾಪಕ ಎಸ್.ಎಂ. ಪೀರನ್, ಕಾಫಿ ಸಂಶೋಧನಾ ಕೇಂದ್ರದ ಜಂಟಿ ಸಂಶೋಧನಾ ನಿರ್ದೇಶಕ ಟಿ. ಎಸ್. ಗೋವಿಂದರಾಜನ್, ಚಿಕ್ಕಮಗಳೂರಿನ ವಿಸ್ತರಣಾ ವಿಭಾಗದ ಉಪ ನಿರ್ದೇಶಕ ಕೆ. ಕಾಳೇಗೌಡ ಮುಖ್ಯ ಅತಿಥಿಗಳಾಗಿದ್ದರು. ಕಾಫಿ ಬೆಳೆ ನಿರ್ವಹಣೆ ಕುರಿತು ತಾಂತ್ರಿಕ ಉಪನ್ಯಾಸಗಳನ್ನು ಕೇಂದ್ರೀಯ ಕಾಫಿ ಸಂಶೋಧನಾ ಸಂಸ್ಥೆಯ ವಿಜ್ಞಾನಿಗಳು ನಡೆಸಿಕೊಟ್ಟರು.

ಸಹ್ಯಾದ್ರಿ ಬೆಳೆಗಾರರ ಸಂಘದ ಕಾರ್ಯದರ್ಶಿ ಕೆ. ಎಸ್. ಶ್ರೀನಿವಾಸ್ ಸ್ವಾಗತಿಸಿ ಪಿ.ಪಿ.ಸಿ.ಎಲ್‌ನ ಕ್ಷೇತ್ರ ಪ್ರತಿನಿಧಿ ಎಲ್. ಎಚ್. ಶಿವಕುಮಾರ್ ವಂದಿಸಿದರು.

(ವರದಿ : ಎಂ. ವಿ. ಗಂಗಾಧರ್)

## ಚಂದಾ ಹೆಚ್ಚಿಸುವ ಅನಿವಾರ್ಯ

ಪ್ರಿಯ ಓದುಗರಲ್ಲಿ,

ಪತ್ರಿಕೆಯ ಮುದ್ರಣ ಕಾಗದದ ಬೆಲೆ ಏರುತ್ತಿರುವ ಲೆಕ್ಕ ಕಲ್ಪನೆಗೂ ಸಿಕ್ಕದಾಗಿದೆ. ಕಳೆದ ಡಿಸೆಂಬರ್-ಜನವರಿಯಲ್ಲಿ ರೀಮಿಗೆ 82 ರಿಂದ 85 ರೂ. ಗಳೊಳಗೆ ಸಿಗುತ್ತಿದ್ದ ಮುದ್ರಣ ಕಾಗದಕ್ಕೆ ಇಂದು 130 ರೂ. ಆಗಿದೆ. ಸಾಲದ್ದಕ್ಕೆ ಈ ಕಾಗದಕ್ಕೆ 'ಅಭಾವ' ಕೂಡ ಸೃಷ್ಟಿಸಿ, ಒಂದಕ್ಕೆ ಒಂದೂವರೆ ಪಟ್ಟು ಸುಲಿಗೆ ಜೋರಿ ಒಂದೆರಡು ತಿಂಗಳಿಂದ ನಡೆದಿದೆ.

ಇಂಥ ಪರಿಸ್ಥಿತಿಯಲ್ಲಿ ಪತ್ರಿಕೆಯ ಉತ್ಪಾದನಾ ವೆಚ್ಚ ವಾರಕ್ಕೆ ಪ್ರತಿ ಸಾವಿರಕ್ಕೆ 600 ರೂ. ಬರುತ್ತಿದೆ. ಹೀಗಾಗಿ ಪತ್ರಿಕೆಯ ಚಂದಾ ಹಣ ಏರಿಸದ ಹೊರತು ಮುದ್ರಣ ವೆಚ್ಚ ನಿಭಾಯಿಸುವುದು ಸಾಧ್ಯವಿಲ್ಲವಾಗಿದೆ.

ಆದ್ದರಿಂದ ಇದೇ ಅಕ್ಟೋಬರ್ 1ರಿಂದ 'ಮುಂಜಾವು' ಪತ್ರಿಕೆಯ ವಾರ್ಷಿಕ ಚಂದಾ 35 ರೂ ಗೆ ಏರಿಸಲೇಬೇಕಾಗಿದೆ. ಓದುಗರು ಎಂದಿನಂತೆಯೇ ಸಹಕರಿಸಿ ಪತ್ರಿಕೆಯನ್ನು ಉಳಿಸಿಕೊಳ್ಳುತ್ತೀರೆಂದು ಆಶಿಸುತ್ತೇನೆ.

—ಸಂಪಾದಕ.

**ಓದುಗರ ಪತ್ರಗಳು**

## "ಜೇಸೀಸ್‌ಗೆ ಸೋಗಿಲ್ಲವೆ?"

ಮಾನ್ಯರೆ,

ನಿಮ್ಮ 3-9-89 ರ ಸಂಚಿಕೆಯಲ್ಲಿ "ಜೇಸೀಸ್‌ಗೆ ಸಮಾಜ ಸೇವೆಯ ಸೋಗಿಲ್ಲ" ಎಂಬ ಪ್ರತಿಕ್ರಿಯೆ ಬಗ್ಗೆ ನನ್ನ ಒಂದು ಅನಿಸಿಕೆ :

ಕಳೆದ ಆ. 15 ರಂದು ಕೊಪ್ಪ ತಾಲ್ಲೂಕು ಬೊಮ್ಲಾಪುರದಲ್ಲಿ, ಕೊಪ್ಪ ಜೇಸೀಸ್‌ನವರು ವಿದ್ಯಾ ಇಲಾಖೆ, ಸಾಮಾಜಿಕ ಅರಣ್ಯ ಯೋಜನೆ ಮತ್ತು ಸ್ಥಳೀಯ ಯುವಕ ಸಂಘ ಇವರ ಸಂಯುಕ್ತ ಆಶ್ರಯದಲ್ಲಿ ವನಮಹೋತ್ಸವ ಕಾರ್ಯಕ್ರಮ ಏರ್ಪಡಿಸಿದ್ದರು. ಕೊಪ್ಪದಿಂದ 4 ಗಂಟೆಗೆ ಆಗಮಿಸಿದ ಇವರೆಲ್ಲರೂ ಸೇರಿ ಕೇವಲ 5 ಗಿಡ ನೆಟ್ಟು, (ಶಾಲೆಯ ಮುಂಭಾಗದಲ್ಲಿ ಇಂದೂ ನೋಡಬಹುದು) ಸುಮಾರು 1 ಗಂಟೆ ಭಾಷಣ ಬಿಗಿಸುವುದರ ಮೂಲಕ 'ವನಮಹೋತ್ಸವ'ವನ್ನು ಆಚರಿಸಿದರು.

ಇವರೆಲ್ಲ ಸೇರಿ ನಡೆಸುವ ವನಮಹೋತ್ಸವ ಕಾರ್ಯಕ್ರಮಕ್ಕೆ ಜಿಲ್ಲಾ ಪರಿಷತ್ ಸದಸ್ಯರು, ಉಪ ಪ್ರಧಾನರು ಮುಂತಾದ ರಾಜಕೀಯ ವ್ಯಕ್ತಿಗಳನ್ನು ಕರೆಸಿ ಗಂಟೆಗಟ್ಟಲೆ ಭಾಷಣ ಬಿಗಿಸುವ ಅವಶ್ಯಕತೆ ಯಿತ್ತೇ? ಇವರೆಲ್ಲ ಮಾಡಿದ ಭಾಷಣಕ್ಕೂ (ಶ್ರೀನಿವಾಸ ರಾವ್‌ರವರ ಭಾಷಣ ಹೊರತುಪಡಿಸಿ) ವನ ಮಹೋತ್ಸವಕ್ಕೂ ಎಲ್ಲಾದರೂ ಸಂಬಂಧ ಕಲ್ಪಿಸಬಹುದಿತ್ತೆ? ಕೇವಲ 5 ಗಿಡ ನೆಡಲಿಕ್ಕಾಗಿ ಇವರೆಲ್ಲ ಕೊಪ್ಪದಿಂದ ಬೊಮ್ಲಾಪುರಕ್ಕೆ ಬರುವ ಅಗತ್ಯವಿತ್ತೇ?

ಸಮಾಜ ಸೇವೆಯ ಸೋಗಿಲ್ಲದಿದ್ದರೆ ಈ ರೀತಿ ಕಾರ್ಯಕ್ರಮ ನಡೆಸುತ್ತಿದ್ದರೆ?

—ರಾಮು, ಬೊಮ್ಲಾಪುರ.

## ಗಣಪತಿ ಉತ್ಸವದಲ್ಲಿ ಉತ್ತಮ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಮಹತ್ವ ನೀಡಿ

ಮಾನ್ಯರೆ,

ಗಣಪತಿ ಹಬ್ಬವನ್ನು ಈಚಿನ ವರ್ಷಗಳಲ್ಲಿ ಎಲ್ಲ ಊರುಗಳಲ್ಲೂ ಜಾತಿ ಮತ ಭೇದವಿಲ್ಲದೆ ಸಾರ್ವಜನಿಕರೆಲ್ಲರೂ ಕೂಡಿ ಸಡಗರದಿಂದ ಆಚರಿಸುತ್ತಿದ್ದಾರೆ. ಕೊಪ್ಪದಲ್ಲೂ ಪೌರ ಗಣೇಶೋತ್ಸವ ಮತ್ತು ಗೆಳೆಯರ ಬಳಗದವರು ಹಲವಾರು ಉತ್ತಮ ಕಾರ್ಯಕ್ರಮಗಳನ್ನು ಒದಗಿಸುತ್ತಿರುವುದು ಸ್ವಾಗತಾರ್ಹ.

ಈ ಬಾರಿಯಂತೂ ಹಲವಾರು ಉತ್ತಮ ಕಾರ್ಯಕ್ರಮಗಳ ಸವಿಯನ್ನು ಸಾರ್ವಜನಿಕರಿಗೆ ಉಣಬಡಿಸಿದ್ದಲ್ಲದೆ, ಸರ್ವೋದಯದಂಥ ಸ್ಥಳೀಯ ಪ್ರತಿಭಾವಂತರಿಗೂ ಉತ್ತಮ ಅವಕಾಶ ಒದಗಿಸಿದ್ದು ಶ್ಲಾಘನೀಯ.

ಇಷ್ಟಾದರೂ ಒಂದು ಕೊರತೆಯೆಂದರೆ, ಇಂಥ ಪವಿತ್ರ ಸನ್ನಿವೇಶದಲ್ಲಿ ಆರ್ಕೆಸ್ಟ್ರಾದಂಥ ಕೀಳು ಸಂಸ್ಕೃತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು. ಅದರಲ್ಲೂ ಆ 'ಕಲಾವಿದರು' ಗಣಪತಿಯ ಸಮ್ಮುಖದಲ್ಲಿ ಪೋಲಿ ಜೋಕ್‌ಗಳು, ಅಶ್ಲೀಲ ನಗೆಹನಿಗಳು ಮುಂತಾದುವನ್ನು ಹೇಳುವುದು ಸಭ್ಯತೆಗೆ ಸಲ್ಲುವಂತಹದಲ್ಲ. ಇದನ್ನು ಎಷ್ಟು ಮಂದಿ ಭಕ್ತಾದಿಗಳು, ಶ್ರೋತೃಗಳು ಇಷ್ಟಪಟ್ಟಾರು ?

ಇವುಗಳ ಬದಲು ಸಂಗೀತ, ಭಾರತ ವಾಚನ, ಹರಿಕಥೆ, ಯಕ್ಷಗಾನ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನೂ, ನಮ್ಮ ನಾಡಿನ ಅನರ್ಘ್ಯ ಕವಿ ರತ್ನಗಳಾದ ಕುವೆಂಪು, ಬೇಂದ್ರೆ, ಶಿವರುದ್ರಪ್ಪ ಮುಂತಾದವರ ಕವನಗಳನ್ನೊಳಗೊಂಡ ಸುಂದರ ರಸಮಂಜರಿ ಕಾರ್ಯಕ್ರಮಗಳನ್ನೂ ಏರ್ಪಡಿಸಿದಲ್ಲಿ ಅನಕ್ಷರಸ್ಥರೂ ಸಹ ಈ ಕವಿಗಳ ಸಾಹಿತ್ಯವನ್ನು ಸವಿಯಲು ಅವಕಾಶವಾಗುತ್ತದೆ.

ನಮ್ಮ ಸಮಿತಿಗಳವರು, ಅದರಲ್ಲೂ ಗೆಳೆಯರ ಬಳಗದವರು ಈ ಕಡೆ ಹೆಚ್ಚು ಗಮನ ನೀಡಿ, ಇನ್ನಷ್ಟು ಉತ್ತಮ ಕಾರ್ಯಕ್ರಮ ನೀಡಲೆಂದು ಆಶಿಸುತ್ತೇವೆ.

—ನಾರಾಯಣಶೆಟ್ಟಿ ಮತ್ತು ಬಳಗ, ಬಾಳಗಡಿ, ಕೊಪ್ಪ.

## ಪುಟ್ಟ ಸುಂದರ ಕಾರ್ಯಕ್ರಮ

(2ನೇ ಪುಟದಿಂದ)

ದ್ದಾರೆ. ಅವರ 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದು ಮಗಳು' ಎರಡೂ ಪ್ರಪಂಚದ ಶ್ರೇಷ್ಠ ಕಾದಂಬರಿಗಳ ಸಾಲಿನಲ್ಲಿ ನಿಲ್ಲಬಲ್ಲ ಮಹಾ ಕಾವ್ಯಗಳು ಆದರೆ ಅವುಗಳ ಭಾಷಾಂತರ ಕೂಡ ತೊಡಕಾಗಿದೆ ಎಂದು ವಿಷಾದಿಸಿದರು.

ಕುವೆಂಪು ಭಾರತದ ಪರಂಪರೆಯ ಕೊಂಡಿ ಎಂದ ಅವರು, ಅಸಮಾನತೆಯನ್ನೇ ತುಂಬಿಕೊಂಡ ಹಿಂದೂ ಧರ್ಮದ ಶ್ರೇಷ್ಠ ಗ್ರಂಥ ರಾಮಾಯಣದ ತನ್ನ ಕೃತಿಯಲ್ಲಿ, ಗಂಡು-ಹೆಣ್ಣಿನ ಸಂಬಂಧದಲ್ಲಿ ಕೂಡ ಸಮಾನತೆಯನ್ನು ಎತ್ತಿ ಹಿಡಿದು, ರಾಮ, ಸೀತೆ ಇಬ್ಬರಿಗೂ ಅಗ್ನಿ ಪರೀಕ್ಷೆ ಮಾಡಿಸಿದ ಕುವೆಂಪುರವರ ಸಮಾನತಾ ಭಾವವನ್ನು ಡಾ|| ಕೂಡಿಗೆ ಎತ್ತಿ ಹೇಳಿದರು.

ಕುವೆಂಪು ಅವರ 'ವಿಶ್ವ ಮಾನವ ಸಂದೇಶ'ದ ಪ್ರತಿಗಳನ್ನು ಎಲ್ಲರಿಗೂ ಹಂಚಲಾಯಿತು.

## ಶೃಂಗೇರಿಗೆ ಶಾಶ್ವತ ಹೆಲಿಪ್ಯಾಡ್

ಶೃಂಗೇರಿ : ಇಲ್ಲಿಗೆ ಆಗಾಗ್ಗೆ ಬರುವ ರಾಷ್ಟ್ರೀಯ ಗಣ್ಯರಿಗಾಗಿ ಶಾಶ್ವತ ಹೆಲಿಪ್ಯಾಡ್ ನಿರ್ಮಿಸಲು ಸಮೀಪದ ಮೆಣಸೆ ಸ ನಂ. 79ರಲ್ಲಿ 5 ಎಕರೆ ಸ್ಥಳ ಮಂಜೂರಾಗಿದ್ದು, ಇನ್ನೂ 4 ಎಕರೆ ಮಂಜೂರು ಮಾಡುವಂತೆ ಜಿಲ್ಲಾಧಿಕಾರಿಗಳನ್ನು ಪೋಲೀಸ್ ಇಲಾಖೆ ಕೋರಿದೆ.

4 ಹೆಲಿಕಾಪ್ಟರ್‌ಗಳು ಏಕ ಕಾಲದಲ್ಲಿ ಬಂದಿಳಿಯುವಂತೆ ಹೆಲಿಪ್ಯಾಡ್ ನಿರ್ಮಿಸಲು ಯೋಚಿಸಲಾಗಿದ್ದು, ಈಗಾಗಲೇ ಸ್ಥಳ ಪರಿಶೀಲನೆ ನಡೆಸಲಾಗಿದೆ ಎಂದು ಎಸ್ಪಿ ತಿಳಿಸಿದ್ದಾರೆ.

ಹೆಲಿಪ್ಯಾಡ್‌ಗೆ ಹೋಗುವ ರಸ್ತೆ ಅಗಲಿಸಬೇಕಾಗಿದ್ದು, ಈ ಬಗ್ಗೆ ಲೋಕೋಪಯೋಗಿ ಇಲಾಖೆಗೂ ತಿಳಿಸಲಾಗಿದೆ ಎಂದಿದ್ದಾರೆ.

## ಪ್ರೌಢಶಾಲಾ ವಿಜ್ಞಾನ ಬೋಧಕರಿಗೆ ಜಿಲ್ಲಾ ಮಟ್ಟದ ಕಾರ್ಯಾಗಾರ

ಹರಿಹರಪುರ : ಜಿಲ್ಲೆಯ ಪ್ರೌಢಶಾಲಾ ಜೀವಶಾಸ್ತ್ರ ಮತ್ತು ರಸಾಯನ ಶಾಸ್ತ್ರ ಬೋಧಕರಿಗಾಗಿ ಸೆ. 8, 9, 10 ರಂದು ಜಿಲ್ಲಾ ಮಟ್ಟದ ವಿಜ್ಞಾನ ಕಾರ್ಯಾಗಾರ ಮತ್ತು ವಿಚಾರ ಗೋಷ್ಠಿ ಇಲ್ಲಿನ ಕಿರಿಯ ಕಾಲೇಜಿನಲ್ಲಿ ನಡೆದವು.

ಹರಿಹರಪುರ ಮಠಾಧೀಶರು ಕಾರ್ಯಾಗಾರ ಉದ್ಘಾಟಿಸಿ, ನಮ್ಮ ಧರ್ಮ ಗ್ರಂಥಗಳಲ್ಲಿರುವ ವೈಜ್ಞಾನಿಕ ವಿಚಾರಗಳನ್ನು ಆಳವಾಗಿ ಅಧ್ಯಯನ ಮಾಡಿ ಬೆಳಕಿಗೆ ತರುವ ಕೆಲಸ ಆಗಬೇಕಾಗಿದೆ ಎಂದರಲ್ಲದೆ, ದಿನೇ ದಿನೇ ಕುಸಿಯುತ್ತಿರುವ ಶಿಕ್ಷಣ ಮಟ್ಟದ ಬಗೆಗೂ ಆತಂಕ ವ್ಯಕ್ತಪಡಿಸಿದರು.

ಅಧ್ಯಾಪಕರು ತಮ್ಮ ಸೇವಾವಧಿಯಲ್ಲಿ ಒಂದೇ ರೀತಿಯ ಕೆಲಸ ಮಾಡುವುದರಿಂದ ಉಂಟಾಗುವ ಜಡತ್ವ ನಿವಾರಿಸಿ, ಹೊಸ ಹೊಸ ಮಾಹಿತಿ, ವಿಚಾರಗಳಿಂದ ಅವರಲ್ಲಿ ಚೈತನ್ಯ ತುಂಬಲು ಇಂಥ ಗೋಷ್ಠಿ, ಕಾರ್ಯಾಗಾರಗಳು ಅಗತ್ಯವೆಂದು ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಶಿಕ್ಷಣ ಉಪ ನಿರ್ದೇಶಕ ಎಸ್. ಆರ್. ವಿನ್ಸೆಂಟ್ ತಿಳಿಸಿದರು.

ಜೆ. ಪಿ. ನೀಲಕಂಠ ಭಟ್, ಬಾಲಕೃಷ್ಣ, ಸುಮಿತ್ರಮ್ಮ ಮುಖ್ಯ ಅತಿಥಿಗಳಾಗಿದ್ದರು. ಜೀವ ಶಾಸ್ತ್ರ ವಿಷಯ ಪರಿವೀಕ್ಷಕಿ ಶ್ರೀಮತಿ ಪ್ರಭಾ ಪ್ರಾಸ್ತಾವಿಕ ಭಾಷಣ ಮಾಡಿದರು. ಪ್ರಿನ್ಸಿಪಾಲ್ ಎಸ್. ವಿ. ಅಡಿಗ ಸ್ವಾಗತಿಸಿದರು. ಉಪನ್ಯಾಸಕ ರಾಮಪ್ರಸಾದ್ ವಂದಿಸಿದರು. ಭಾಸ್ಕರಾಚಾರ್ ಕಾರ್ಯಕ್ರಮ ನಿರ್ವಹಿಸಿದರು.

106 ಜನ ವಿಜ್ಞಾನ ಶಿಕ್ಷಕರು ಜಿಲ್ಲಾದ್ಯಂತದಿಂದ ಸ್ವಂತ ಖರ್ಚಿನಲ್ಲಿ ಈ ಶಿಬಿರಕ್ಕೆ ಹಾಜರಾಗಿದ್ದರು. ಉಪನ್ಯಾಸ ನೀಡಲು ಶೃಂಗೇರಿ, ಶಿವಮೊಗ್ಗ, ಚಿತ್ರದುರ್ಗ ಮತ್ತು ಚಿಕ್ಕಮಗಳೂರು ಕಾಲೇಜುಗಳಿಂದ ತಜ್ಞರು ಬಂದಿದ್ದರು. ಶೃಂಗೇರಿಯ ಡಾ|| ಲಕ್ಷ್ಮೀನಾರಾಯಣ್ ಪ್ರಥಮ ಚಿಕಿತ್ಸೆ ಬಗ್ಗೆ ಮಾಹಿತಿ ನೀಡಿದರು. ಶಿಬಿರದ ಕೊನೆಯಲ್ಲಿ ಜೀವ ಶಾಸ್ತ್ರ ಮತ್ತು ರಸಾಯನ ಶಾಸ್ತ್ರದ ಜೀವನಾನ್ವಯದ ಬಗ್ಗೆ ಚರ್ಚೆ ನಡೆಯಿತು. ಬೋಧನ ಸಾಮಗ್ರಿಗಳ ಪ್ರದರ್ಶನ ಹಾಗೂ ಸಾರ್ವಜನಿಕರಿಗೆ ವಸ್ತು ಪ್ರದರ್ಶನ ಮತ್ತು ಮನರಂಜನೆ ಏರ್ಪಡಿಸಲಾಗಿತ್ತು.

ಕಾಲೇಜು ಸಿಬ್ಬಂದಿ, ವಿದ್ಯಾರ್ಥಿ ವೃಂದ ಸುತ್ತ ಮುತ್ತಲಿನ ದಾನಿಗಳ ಮತ್ತು ಆಡಳಿತ ಮಂಡಳಿ ನೆರವಿನಿಂದ ಶಿಬಿರಾರ್ಥಿಗಳ ಊಟ-ವಸತಿ ಏರ್ಪಡಿಸಿದ್ದರು. ಇಂಥ ಉಪಯುಕ್ತ ಶಿಬಿರಗಳು ಎಲ್ಲ ಬೋಧನ ವಿಷಯಗಳ ಬಗೆಗೂ ನಡೆದಲ್ಲಿ ಅತ್ಯಂತ ಉಪಯುಕ್ತ.

(ವರದಿ : ಅನಿಲ್ ಕುಮಾರ್, ಜೆ. ಆರ್. ಎಸ್. ಪ್ರಕಾಶ್)

## ಜಿಲ್ಲಾ ಮಟ್ಟದ ಸೈಕಲ್ ಸ್ಪರ್ಧೆ

ಹಿರೇಮಗಳೂರಿನ ನವಚೇತನ ಯುವಕ ಸಂಘದವರು 14-10-89ರಂದು ಜಿಲ್ಲಾ ಮಟ್ಟದ ಸೈಕಲ್ ಸ್ಪರ್ಧೆ ಏರ್ಪಡಿಸಿದ್ದಾರೆ. 500, 300 ಮತ್ತು 200 ರೂ.ಗಳ ನಗದು ಬಹುಮಾನಗಳು ಮತ್ತು ಪ್ರಶಸ್ತಿ ಪತ್ರಗಳನ್ನು ನೀಡಲಾಗುವುದು. ಸ್ಪರ್ಧೆಯಲ್ಲಿ ಗೇರ್ ಸೈಕಲ್ ನಿಷೇಧಿಸಿದೆ.

ಆಸಕ್ತರು ದಿನಾಂಕ 10-10-89 ರೊಳಗೆ ಕಾರ್ಯದರ್ಶಿ, ನವ ಚೇತನ ಯುವಕ ಸಂಘ, ಹಿರೇಮಗಳೂರು, ಚಿಕ್ಕಮಗಳೂರು— ಇವರನ್ನು ಸಂಪರ್ಕಿಸಬಹುದು.

## ಗ್ರಾಮ ಸಾಮೂಹಿಕ ಭೂಮಿ ರಕ್ಷಿಸಿ ಸಾಮಾಜಿಕ ಅರಣ್ಯ ಬೆಳೆಸಲು ಆಗ್ರಹ

ಕೊಪ್ಪ : ಅದ್ದಡ ಗ್ರಾಮದ ಸ ನಂ 137ರಲ್ಲಿರುವ ಕೇವಲ 15 ಎಕರೆ 27 ಗುಂಟೆ ಪ್ರದೇಶವನ್ನು ಸುತ್ತಮುತ್ತಲ ಸುಮಾರು 60 ಕುಟುಂಬಗಳಿಗೆ ಸೊಪ್ಪು-ಸವೆ, ದನಕರುಗಳ ಮೇವಿಗೆ ಉಪಯೋಗಕ್ಕಾಗಿ ಹಿಂದಿನಿಂದಲೂ ಕಾದಿರಿಸಲಾಗಿದ್ದು, ಇದೀಗ ಅಲ್ಲಿಂದ ಹೊರಗಿನ ಶ್ರೀಮಂತರು ಲಾರಿಗಳಲ್ಲಿ ಸೊಪ್ಪು, ಮೇಲ್ಮಣ್ಣು ಮುಂತಾದ ನೈಸರ್ಗಿಕ ಸವಲತ್ತುಗಳನ್ನು ವ್ಯಾಪಕ ಪ್ರಮಾಣದಲ್ಲಿ ಸಾಗಿಸುವುದಕ್ಕೆ ಸ್ಥಳೀಯರು ತಡೆಯೊಡ್ಡಿದ್ದಾರೆ.

ಈಚೆಗೆ ಈ ಬಗ್ಗೆ ಶಾಂತಿಯುತವಾದರೂ ತೀವ್ರ ರೀತಿಯಲ್ಲಿ ಪ್ರತಿಭಟಿಸಿದ ಗ್ರಾಮಸ್ಥರು, ಶ್ರೀಮಂತರ ಕುಮ್ಮಕ್ಕಿನಿಂದ ಪೋಲೀಸ್ ಠಾಣೆಯನ್ನೂ, ಕಾಣಬೇಕಾಯಿತಾದರೂ ಅಲ್ಲಿ ತಮ್ಮ ನ್ಯಾಯ ಮತ್ತು ಒಗ್ಗಟ್ಟಿನ ಬಲದಿಂದ ಆಕ್ರಮಣಕಾರರೇ ಮುಚ್ಚಳಿಕೆ ಬರೆದುಕೊಡುವಂತೆ ಮಾಡುವಲ್ಲಿ ಯಶಸ್ವಿಯಾದರು.

ಈ ಪ್ರದೇಶದ ಮೇಲೆ ಐದಾರು ವರ್ಷಗಳಿಂದ ದರ್ಖಾಸ್ತಿಗಾಗಿ ಅಕ್ರಮ ಯತ್ನಗಳು ನಡೆದಿದ್ದನ್ನು ಗ್ರಾಮಸ್ಥರು ಜಿಲ್ಲಾಧಿಕಾರಿಗಳ ಗಮನಕ್ಕೆ ತಂದಾಗ ಅಂಥ ಎಲ್ಲ ದರ್ಖಾಸ್ತುಗಳನ್ನೂ ರದ್ದುಗೊಳಿಸಿ, ಅದನ್ನು ಸಾಮಾಜಿಕ ಅರಣ್ಯ ಮಾಡುವಂತೆ ಸೂಚಿಸಿದ್ದರು. ಅರಣ್ಯ ಇಲಾಖೆ ಕೂಡಲೇ ಆ ಬಗ್ಗೆ ಕ್ರಮ ಕೈಗೊಂಡು, ಈ ಪ್ರದೇಶವನ್ನು ನಿಜವಾದ ಅರ್ಥದಲ್ಲಿ ಸ್ಥಳೀಯರ ಸಾಮಾಜಿಕ ಅರಣ್ಯವಾಗಿ ಬೆಳೆಸಿಕೊಡಬೇಕೆಂದು ಗ್ರಾಮಸ್ಥರು ಎ. ಸಿ. ಎಫ್. ರವರನ್ನು ಕೋರಿದ್ದಾರೆ.

## ಸಣ್ಣ ಉಳಿತಾಯ : ತಾ|| ನ 4 ಅಧಿಕಾರಿಗಳಿಗೆ ಬಹುಮಾನ

[illegible]ಪ್ಪ : ಸಣ್ಣ ಉಳಿತಾಯದಲ್ಲಿ ಗಣನೀಯ ಸಾಧನೆ ಮಾಡಿದ ತಾಲ್ಲೂಕಿನ ನಾಲ್ಕು ಮಂದಿ ಅಧಿಕಾರಿಗಳಿಗೆ 1988-89ನೇ ಸಾಲಿನಲ್ಲಿ ಸರ್ಕಾರದ ಪ್ರೋತ್ಸಾಹಕ ಬಹುಮಾನ ಹಾಗೂ ಪ್ರಶಸ್ತಿ ಪತ್ರಗಳನ್ನು ನೀಡಲಾಗಿದೆ.

ತಾಲ್ಲೂಕಿನ ಹಿಂದಿನ ತಹಸೀಲ್ದಾರ್ ಶ್ರೀನಿವಾಸ್, ಮೇಗುಂದಾ ಹೋಬಳಿ ಕಂದಾಯ ನಿರೀಕ್ಷಕ ವಿಜಯ ಕುಮಾರ್, ಡಿ. ಎಫ್. ಓ. ಕಿಶನ್‌ಸಿಂಗ್ ಸುಗಾರ ಮತ್ತು ಸಹಾಯಕ ವಿದ್ಯಾಧಿಕಾರಿ ಚಾಮರಾಜ್ ಇವರು ಈ ಸಾಧನೆ ಮಾಡಿದ ಅಧಿಕಾರಿಗಳಾಗಿದ್ದು ಜಿಲ್ಲೆಯಲ್ಲಿ ಸಣ್ಣ ಉಳಿತಾಯದಲ್ಲಿ ಬಹುಮಾನ ಪಡೆದ 66 ಮಂದಿ ಅಧಿಕಾರಿಗಳಲ್ಲಿ ಇವರೂ ಸೇರಿದ್ದಾರೆ.

## ಗ್ರಂಥಪಾಲಕರ ನೇಮಕಕ್ಕೆ ಆಗ್ರಹಿಸಿ ಚಳುವಳಿ

ನ. ರಾ. ಪುರ : ಇಲ್ಲಿನ ಪ್ರಥಮ ದರ್ಜೆ ಕಾಲೇಜಿನಲ್ಲಿ ಗ್ರಂಥಾಲಯವಿದ್ದರೂ ಗ್ರಂಥಪಾಲಕರಿಲ್ಲದೆ ವಿದ್ಯಾರ್ಥಿಗಳಿಗೆ ಪುಸ್ತಕಗಳು ಸಮರ್ಪಕವಾಗಿ ದೊರೆಯುತ್ತಿಲ್ಲ. ಕೂಡಲೇ ಗ್ರಂಥಪಾಲಕರನ್ನು ನೇಮಿಸಬೇಕು ಎಂದು ಒತ್ತಾಯಿಸಿ ವಿದ್ಯಾರ್ಥಿಗಳು ಚಳುವಳಿ ನಡೆಸಿದರು. 3ನೇ ದಿನ ಅದನ್ನು ಇನ್ನೂ ತೀವ್ರಗೊಳಿಸುವ ಸಿದ್ಧತೆಯಲ್ಲಿದ್ದಾಗ, ತಹಸೀಲ್ದಾರ್ ಮತ್ತು ಸಬ್ ಇನ್‌ಸ್ಪೆಕ್ಟರ್ ಮಧ್ಯೆ ಪ್ರವೇಶಿಸಿ ಅದಷ್ಟು ಶೀಘ್ರ ಪುಸ್ತಕ ವಿತರಣೆಗೆ ವ್ಯವಸ್ಥೆ ಮಾಡುವ ಭರವಸೆ ಇತ್ತ ಮೇರೆಗೆ ಚಳುವಳಿ ನಿಲ್ಲಿಸಿ, ಕಾಲೇಜು ಶಿಕ್ಷಣ ನಿರ್ದೇಶಕರಿಗೆ ಪುನಃ ಮನವಿ ಸಲ್ಲಿಸಿದ್ದಾರೆ.

(ವರದಿ : ಎಚ್. ಎಂ. ಶಿವಣ್ಣ)

# ಬರುವ ಚುನಾವಣೆಗಳಲ್ಲಿ ಬದಲಿ ಸರ್ಕಾರ ಸ್ಥಾಪನೆಗೆ ಸಿಪಿಐ ಸಮಾವೇಶದ ಕರೆ

ಕೊಪ್ಪ : ಭಾರತ ಕಮ್ಯೂನಿಸ್ಟ್ ಪಕ್ಷದ ಶೃಂಗೇರಿ ಕ್ಷೇತ್ರ ಮಟ್ಟದ ರಾಜಕೀಯ ಸಮಾವೇಶವು ಸೆ. 10 ರಂದು ಇಲ್ಲಿ ನಡೆಯಿತು. ಇದರಲ್ಲಿ ಕೊಪ್ಪ, ನ.ರಾ. ಪುರ ಮತ್ತು ಶೃಂಗೇರಿ ತಾಲ್ಲೂಕುಗಳ ಸುಮಾರು 350 ಜನ ಕಾರ್ಯಕರ್ತರು ಭಾಗವಹಿಸಿದ್ದರು

ಎಚ್. ಆರ್. ಸಂಜೀವ, ಎನ್. ಆರ್. ಚಂದ್ರಶೇಖರ್ ಮತ್ತು ಕೆ. ಬಾಲಭಾಸ್ಕರ ಕರ್ತರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ಅತಿಥಿಗಳಾಗಿ ಪಕ್ಷದ ರಾಜ್ಯ ಸಹ ಕಾರ್ಯದರ್ಶಿಗಳಾದ ಎನ್. ಪಿ. ಜಗದೀಶ್, ಜಿಲ್ಲಾ ಕಾರ್ಯದರ್ಶಿ ಬಿ. ಕೆ. ಸುಂದರೇಶ್, ಸಹ ಕಾರ್ಯದರ್ಶಿ ಪಿ. ವಿ. ಲೋಕೇಶ್, ಕಾರ್ಮಿಕ ಮುಖಂಡ ಎಚ್. ಎಂ. ರೇಣುಕಾರಾಧ್ಯ ಮತ್ತು ಎಂ. ಎಲ್. ಸೇವಿಯರ್ ಸಮಾವೇಶವನ್ನುದ್ದೇಶಿಸಿ ಮಾತನಾಡಿದರು.

ಬಿ. ಕೆ. ಸುಂದರೇಶ್‌ರವರು ಇಂದಿನ ರಾಜ್ಯ ಹಾಗೂ ರಾಷ್ಟ್ರ ರಾಜಕೀಯ ಪರಿಸ್ಥಿತಿಯನ್ನು ವಿವರಿಸುತ್ತಾ, 40 ವರ್ಷಗಳ ಕಾಂಗ್ರೆಸ್ ಆಳ್ವಿಕೆಯಲ್ಲಿ ನಮ್ಮ ದೇಶ ಅಧೋಗತಿಗಿಳಿದಿದ್ದು, ಮುಂಬರುವ ವಿಧಾನಸಭೆ ಮತ್ತು ಲೋಕಸಭೆ ಚುನಾವಣೆಗಳಲ್ಲಿ ಬದಲೀ ಸರ್ಕಾರ ರಚನೆಯಾಗುವಂತಹ ಪರಿಸ್ಥಿತಿ ನಿರ್ಮಾಣ ಮಾಡಲು ಸಮಾವೇಶಕ್ಕೆ ಕರೆ ಕೊಡುತ್ತಾ, ಕರ್ನಾಟಕ ರಾಜ್ಯ ರೈತ ಸಂಘ, ದಲಿತ ಸಂಘರ್ಷ ಸಮಿತಿ ಮುಂತಾದ ಪ್ರಗತಿಪರ ಸಂಘಟನೆಗಳು ಸಕ್ರಿಯವಾಗಿ ಪಾಲ್ಗೊಂಡು ದೇಶದಲ್ಲಿ ಉಂಟಾಗಿರುವ ಅರಾಜಕತೆಯನ್ನು ತೊಡೆದು ಹಾಕಲು ಶ್ರಮಿಸಬೇಕೆಂದರು. ರಾಜ್ಯದಲ್ಲಿರುವ ರಾಷ್ಟ್ರಪತಿ ಆಳ್ವಿಕೆ ಕೊನೆಗೊಂಡು ಶೀಘ್ರವೇ ಚುನಾವಣೆ ನಡೆಸುವಂತೆ ಸಮಾವೇಶ ಒತ್ತಾಯಿಸಿತು.

ಮುಂಬರುವ ವಿಧಾನಸಭಾ ಚುನಾವಣೆಗೆ ಶೃಂಗೇರಿ ಕ್ಷೇತ್ರದಲ್ಲಿ ಪಕ್ಷವು ಸ್ಪರ್ಧಿಸಬೇಕೆಂದು ಸಮಾವೇಶ ನಿರ್ಧರಿಸಿತು.

ಈಗಾಗಲೇ ವಿವಾದ ಉದ್ಭವಿಸಿರುವ ಭದ್ರಾ ಮೇಲ್ದಂಡೆ ಯೋಜನೆ ವಿಚಾರದಲ್ಲಿ ಸರ್ಕಾರ ಏಕ ಪಕ್ಷೀಯ ತೀರ್ಮಾನ ಕೈಗೊಳ್ಳಬಾರದೆಂದೂ, ಕ್ಷೇತ್ರದಾದ್ಯಂತ ಬಗರ್ ಹುಕುಂ ಸಾಗುವಳಿದಾರರ ಮೇಲೆ ಅರಣ್ಯ ಇಲಾಖೆಯವರು ನಡೆಸುತ್ತಿರುವ ದೌರ್ಜನ್ಯವನ್ನು ಖಂಡಿಸಿ, ರೈತರು ಹಾಲಿ ಸಾಗುವಳಿ ಮಾಡುತ್ತಿರುವ ಭೂಮಿಯ ಒಡೆತನವನ್ನು ಅವರಿಗೇ ನೀಡಬೇಕೆಂದೂ, ಜಿಲ್ಲೆಯ ಎಲ್ಲಾ ಖಾಸಗಿ ಬಸ್ ಮಾರ್ಗಗಳನ್ನು ಕೂಡಲೇ ರಾಷ್ಟ್ರೀಕರಣ ಮಾಡಿ ಎಲ್ಲಾ ಕೆಲಸಗಾರರಿಗೂ ಕೆಲಸದ ಭದ್ರತೆಯನ್ನು ಒದಗಿಸುವಂತೆಯೂ ಸಮಾವೇಶ ಸರ್ಕಾರವನ್ನು ಒತ್ತಾಯಿಸಿತು.

ಪಕ್ಷದ ಕೊಪ್ಪ ತಾ|| ಕಾರ್ಯದರ್ಶಿ ಎನ್. ಆರ್. ರಾಮಚಂದ್ರ ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ ಶೃಂಗೇರಿ ಕ್ಷೇತ್ರ ರಾಜಕೀಯದ ಸಂಕ್ಷಿಪ್ತ ಪರಿಚಯ ಮಾಡಿಕೊಟ್ಟರು. ನ.ರಾ. ಪುರ ಘಟಕದ ಕಾರ್ಯದರ್ಶಿ ಕೆ. ಎಚ್. ಯೋಗೇಶ್ ವಂದಿಸಿದರು

(ವರದಿ: ಚಿಕ್ಕೇಗೌಡ.)

## ಪೌಷ್ಟಿಕ ಆಹಾರ ಶಿಬಿರ

ಬಂಡಿಗಡಿ : ಇಲ್ಲಿನ ಅಂಗನವಾಡಿ ಕೇಂದ್ರದಲ್ಲಿ ಸೆ. 20 ರಂದು ಪೌಷ್ಟಿಕ ಆಹಾರ ಶಿಬಿರ ಎಸ್. ಎಂ. ಲಿಂಗಪ್ಪ ಅವರ ಅಧ್ಯಕ್ಷತೆಯಲ್ಲಿ ನಡೆಯಿತು.

ಶಿಬಿರದ ಮಹತ್ವ ಮತ್ತು ಪ್ರಯೋಜನಗಳನ್ನು ವಿವರವಾಗಿ ತಿಳಿಸಿದ ಅಂಗನವಾಡಿ ಮೇಲ್ವಿಚಾರಕಿ ಕು|| ಜ್ಞಾನಪೂರ್ಣ, ಮಕ್ಕಳು ಮತ್ತು ತಾಯಂದಿರಿಗಾಗಿ ಇರುವ ಸರ್ಕಾರದ ವಿವಿಧ ರೀತಿಯ ಯೋಜನೆಗಳ ಪ್ರಯೋಜನಗಳನ್ನು ಪಡೆದುಕೊಂಡು ಎಲ್ಲರೂ ಆರೋಗ್ಯವಂತರಾಗುವಂತೆ ಕರೆ ನೀಡಿದರು. ವೈದ್ಯಾಧಿಕಾರಿ ಡಾ|| ನೀಲಕಂಠರವರು ಮುಖ್ಯ ಅತಿಥಿಗಳಾಗಿ ಮಾತನಾಡಿ ಪೌಷ್ಟಿಕ ಆಹಾರದ ಮಹತ್ವ ಹಾಗೂ ಆರೋಗ್ಯದ ಬಗ್ಗೆ ತಿಳಿಸಿದರು. ಎಸ್. ಎಸ್. ರಾಮಪ್ಪ ಸಮಾರಂಭದಲ್ಲಿ ಮಾತನಾಡಿದರು. ಶಿಬಿರದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳು, ಹಾಗೂ ಪೋಷಕರು ಭಾಗವಹಿಸಿದ್ದರು. ಅಂಗನವಾಡಿಯ ಪುಟಾಣಿಗಳಿಂದ ವಿವಿಧ ಚಟುವಟಿಕೆಗಳನ್ನು ಪ್ರದರ್ಶಿಸಲಾಯಿತು. ಪೌಷ್ಟಿಕ ಆಹಾರದ ಸ್ಯಾಂಪಲ್ಲನ್ನು ಎಲ್ಲರಿಗೂ ನೀಡಲಾಯಿತು. ಕಾರ್ಯಕರ್ತೆ ಕೆ. ಎಸ್. ಪದ್ಮಾವತಿ ಸ್ವಾಗತಿಸಿ, ಎಚ್. ಎಸ್. ಜಯಲಕ್ಷ್ಮಿ ವಂದಿಸಿದರು. (ವರದಿ: ಬಿ.ಎ. ಭಾಸ್ಕರ್)

# ಜಿ.ಪ. ಸದಸ್ಯೆ ಬೇಲಿ ಹಾಕಿಸಿದ್ದ ಉಚಿತ ನಿವೇಶನ ಸರ್ಕಾರದ ವಶಕ್ಕೆ

(1ನೇ ಪುಟದಿಂದ)

ಆದರೆ ಬೇಲಿ ತೆಗೆಸಲು ತಹಸೀಲ್ದಾರ್‌ರವರು ಕ್ರಮ ಕೈಗೊಂಡಾಗ, "ಕೊಪ್ಪದ ಸುತ್ತಮುತ್ತ ಅಕ್ರಮವಾಗಿ ಹಾಕಿಕೊಂಡಿರುವ ಎಲ್ಲ ಬೇಲಿಗಳನ್ನೂ ತೆಗೆಸುವುದಾದರೆ ನಮ್ಮ ಬೇಲಿಯನ್ನೂ ತೆಗೆಸಿ" ಎಂದು ಈ ಜಿ. ಪ. ಸದಸ್ಯೆ ಪಟ್ಟು ಹಿಡಿದಿದ್ದರೆನ್ನಲಾಗಿದೆ.

ಈ ಪ್ರದೇಶದ ಸ. ನಂ: 130 ಮತ್ತು 131ರಲ್ಲಿ ಆಮೂಲಾಗ್ರ ಸರ್ವೆ ಮಾಡಿಸಿದ ತಹಸೀಲ್ದಾರರು, ಸಾಗುವಳಿ ಚೀಟಿ ಇದ್ದವರೆಲ್ಲರೂ ಕಛೇರಿಗೆ ತಂದು ತೋರಿಸಬೇಕೆಂದೂ, ಇಲ್ಲದಿದ್ದವರನ್ನು ತೆರವು ಮಾಡಿಸುವುದಾಗಿಯೂ ನೇತಾಜಿ ನಗರ, ಇಂದಿರಾ ನಗರಗಳ ಜನತಾ ನಿವಾಸಿಗಳಿಗೆ ಸೂಚನೆ ನೀಡಿದಾಗ ಕಂಗಾಲಾದ ಅವರೆಲ್ಲ ಹರಂದೂರು ಮಂಡಲ ಪಂಚಾಯ್ತಿಗೂ ತಹಸೀಲ್ದಾರರಿಗೂ ಮನವಿಗಳನ್ನು ಸಲ್ಲಿಸಿದರು.

ಈ ಸಮಸ್ಯೆಯ ಇತ್ಯರ್ಥಕ್ಕಾಗಿ ತಹಸೀಲ್ದಾರರು ಸೆ. 20ರಂದು ಶಾಂತಿ ಸಮಿತಿ ಮತ್ತು ಸಾರ್ವಜನಿಕ ಹಾಗೂ ವಿವಿಧ ಪಕ್ಷಗಳ ಪ್ರತಿನಿಧಿಗಳ ಸಭೆ ಕರೆದರು. ವಿವಾದ ಗ್ರಸ್ತ ನಿವೇಶನಗಳನ್ನು ಈಗಾಗಲೇ ಸರ್ಕಾರಿ ಉದ್ದೇಶಕ್ಕಾಗಿ ಕಾದಿರಿಸಿ ಎ. ಸಿ. ಯವರು [illegible] ಮಾಡಿರುವುದರಿಂದ ಅದರಲ್ಲಿ ಅತಿ[illegible]ದ ಪ್ರಶ್ನೆಯೇ ಇಲ್ಲವೆಂದು ತಹಸೀ[illegible]ಳಿಸಿದಾಗ, ಉದ್ದೇಶಿತ ಉಪವಾಸ ಸತ್ಯಾಗ್ರಹವನ್ನು ಕೈಬಿಡಲೊಪ್ಪಿದ ನಾಗರಿಕ ಹೋರಾಟ ಸಮಿತಿಯವರು, ಎ. ಸಿ. ಆದೇಶದ ವಿರುದ್ಧ ಸುಮಿತ್ರಮ್ಮ ಡಿ.ಸಿ.ಗೆ ಅಪೀಲು ಸಲ್ಲಿಸಿದಲ್ಲಿ ತಾವೂ ತಕರಾರು ಸಲ್ಲಿಸುವುದಾಗಿ ತಿಳಿಸಿದರು.

ಉಳಿದ ಬಡ ಜನಗಳ ಸಮಸ್ಯೆ ಬಗ್ಗೆ ಸುದೀರ್ಘ ಚರ್ಚೆ ನಡೆಯಿತು. ಅಲ್ಲಿ ಮಿಕ್ಕಿರುವ ಭೂಮಿಯನ್ನು ನಿವೇಶನ ಕೋರಿದ ಅರ್ಜಿದಾರರಿಗೆ ಹರಾಜಿನಲ್ಲಿ ಹಾಗೂ ಉಚಿತವಾಗಿ ಹಂಚಲು ಹರಂದೂರು ಮಂಡಲಕ್ಕೆ ನೀಡಬೇಕೆಂದು ಕೋರಿದ ಮಂಡಲ ಪ್ರಧಾನ ಗುಣವಂತೆ ಪರಮೇಶ್ವರ, ಈ ಪ್ರಸ್ತಾಪಕ್ಕೆ ಎ.ಸಿ.ಯವರ ಅನುಮೋದನೆಯನ್ನು ಹಾಜರುಪಡಿಸಿದರು.

ಕೊನೆಗೆ ಈ ಕೆಳಗಿನಂತೆ ಸರ್ವಾನುಮತದ ನಿರ್ಣಯಕ್ಕೆ ಬರಲಾಯಿತು: ಈಗ ತಹಸೀಲ್ದಾರರು ಕೈಗೆತ್ತಿಕೊಂಡಿರುವ ಸರ್ವೆಯನ್ನು ಕೊಪ್ಪ ಸುತ್ತಲಿನ ಎಲ್ಲ ಆಕ್ರಮಿತ ಸ. ನಂ ಗಳಲ್ಲೂ ಪೂರ್ಣಗೊಳಿಸುವುದು; ಈಗಾಗಲೇ ಅನಧಿಕೃತವಾಗಿ ಮನೆ ಕಟ್ಟಿ ವಾಸವಿದ್ದವರಿಗೆ ಬೇರೆ ಮನೆ–ನಿವೇಶನ ಇಲ್ಲದಿದ್ದಲ್ಲಿ ಅಂಥವರಿಂದ ಅರ್ಜಿ ಪಡೆದು ಅವರಿಗೆ ಮನೆ ದಳ 2 ಗುಂಟೆ ಮಾತ್ರ ಮಂಜೂರು ಮಾಡುವುದು; ಬರೀ ಬೇಲಿ ಹಾಕಿಕೊಂಡಿರುವುದನ್ನೆಲ್ಲ ತೆರವು ಮಾಡಿಸುವುದು; ಹೀಗೆ ಮಿಕ್ಕ ಭೂಮಿಯನ್ನು ಹರಂದೂರು ಮಂಡಲಕ್ಕೆ ನಿವೇಶನಗಳಿಗಾಗಿ ಮಂಜೂರು ಮಾಡುವುದು; ಜನತಾ ನಿವೇಶನ ಅಥವಾ ಮನೆ ಮಂಜೂರಾಗಿದ್ದು ಅದನ್ನು ಬೇರೆಯವರಿಗೆ ಮಾರಿದ್ದರೆ ಅಥವಾ ಬಾಡಿಗೆಗೆ ಕೊಟ್ಟಿದ್ದರೆ ಅಂಥವನ್ನು ರದ್ದುಗೊಳಿಸಿ, ಹಾಲಿ ಅನುಭೋಗದಾರರಿಗೆ ಅರ್ಹತೆಯಿದ್ದಲ್ಲಿ ಮುಂದೆ ಅವರಿಗೆ ಮಂಜೂರು ಮಾಡಲು ಕ್ರಮ ಕೈಗೊಳ್ಳುವುದು ; ನೆಲಗಟ್ಟು ಹಾಕಿ ಸಿದ್ಧತೆ ನಡೆಸಿರುವವರಿಗೆ ಅರ್ಹತೆಯ ಆಧಾರದಲ್ಲಿ ತಹಸೀಲ್ದಾರರು ತಮ್ಮ ವಿವೇಚನೆ ಬಳಸಿ ನಿರ್ಣಯಿಸುವುದು ; ಬೇಲಿ ತೆರವು ಮಾಡಿಸಬೇಕಾದವರಿಗೆ ತಾವೇ ತೆಗೆಸಲು ಒಂದು ವಾರ ಕಾಲಾವಕಾಶ ನೀಡುವುದು.

ಒಟ್ಟಿನಲ್ಲಿ ಮನೆ ಇಲ್ಲದವರ ವಿಚಾರದಲ್ಲಿ ಅತ್ಯಂತ ಸಹಾನುಭೂತಿಯಿಂದ ವರ್ತಿಸಬೇಕೆಂದು ತಹಸೀಲ್ದಾರರನ್ನು ಕೋರಲಾಯಿತು.

## ಪೇಟೆ ಧಾರಣೆ

**ಅಡಿಕೆ**

ಶಿವಮೊಗ್ಗ : 22-9-1989
ಸರಕು : 3250-3600
ಬೆಟ್ಟೆ : 2471-2939
ಗೊರಬಲು : 1000-1598
ಸಾಗರ : 22.9.1989
ಇಡಿ : 2363-2562
ಚಾಲಿ : 2509-2745
ಅಪಿ : 3461-3656
ಸಿಪ್ಪೆ ಗೋಟು : 1203-1439

**ಕಾಳು ಮೆಣಸು**

ಸಾಗರ : ರೂ. 4508

**ಏಲಕ್ಕಿ**

ಕೊಪ್ಪ, 22-9-89
ರಾಶಿ ರೂ. 200-230

**ಸಕಲೇಶಪುರ**

ರಾಶಿ ರೂ. 240-250
ಮಡಿಕೇರಿ : 260-271



ಸಂಪಾದಕ, ಮುದ್ರಕ, ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ದೀವಟಿಗೆ ಅಚ್ಚು ಕೂಟ, ಕೊಪ್ಪ